ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ಗ್ರಾಮ ಪಂಚಾಯತ್‌ಗಳಲ್ಲಿ ಸಿಬ್ಬಂದಿಗಳ ಹೆಚ್ಚಳದ ಕುರಿತು

ಶ್ರೀ ಎಸ್. ರವಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1373 (1565) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಗ್ರಾಮಪಂಚಾಯಿತಿಗಳಲ್ಲಿ ಸಿಬ್ಬಂದಿ ಹೆಚ್ಚಳದ ಬಗ್ಗೆ ಕೇಂದ್ರ ಸರ್ಕಾರ, ರಾಜ್ಯಸರ್ಕಾರ, ವಿದೇಶಿ ಪ್ರಾಯೋಜಿತ ಯೋಜನೆಗಳು ಇತರೆ ಇಲಾಖೆಗಳ ಕರ್ತವ್ಯಗಳ ಕಾರ್ಯ ಹಂಚಿಕೆಗೆ ಅನುಗುಣವಾಗಿ ಕೆಲಸ ನಿರ್ವಹಿಸಲು ಸರ್ಕಾರವು ಮಂಜೂರಾತಿ ನೀಡಿರುವ ಸರ್ಕಾರೇತರ ಸ್ಥಳೀಯ ಸಂಸ್ಥೆಗಳು ಆಯ್ಕೆ ಮಾಡುವ ವೃಂದವಾರು ಅಥವಾ ಶ್ರೇಣಿವಾರು ವಿವರ ನೀಡುವುದು ;

(ಆ) ಗ್ರಾಮ ಪಂಚಾಯಿತಿಗಳ ಸಿಬ್ಬಂದಿಗಳ ಕಾರ್ಯ ಒತ್ತಡ ಕುರಿತು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸಿಬ್ಬಂದಿ ಹೆಚ್ಚಳದ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು ;

(ಇ) ಗ್ರಾಮ ಪಂಚಾಯಿತಿಯ ಡೇಟಾ ಎಂಟ್ರಿ ಆಪರೇಟರ್ 01 ಹುದ್ದೆಯಿಂದ ಕ್ರ.ಸಂ. 6ರಲ್ಲಿ ನಮೂದಿಸಿರುವ ಸಾರ್ವಜನಿಕ ಕೆಲಸ ಕಾರ್ಯಗಳನ್ನು ನಿಗಧಿತ ಅವಧಿಯಲ್ಲಿ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಗ್ರಾಮ ಪಂಚಾಯಿತಿಗಳು ನಿಗಧಿತ ಅವಧಿಯಲ್ಲಿ ಸೇವೆ ಒದಗಿಸುತ್ತಿವೆಯೇ ; ಒದಗಿಸದಿದ್ದಲ್ಲಿ, ಹೆಚ್ಚುವರಿಯಾಗಿ ನಿಯಮಾನುಸಾರ ಗ್ರಾಮ ಪಂಚಾಯಿತಿ ಸಿಬ್ಬಂದಿ ನೇಮಕ ಮಾಡಿಕೊಳ್ಳಲು ಹುದ್ದೆಗಳ ಮಂಜೂರಾತಿಯನ್ನು ಸರ್ಕಾರ ನೀಡುವುದೇ ? (ವಿವರ ನೀಡುವುದು)